# 146

# ಅಭಿಮನ್ಯು

ಅಥವಾ

## ಚಕ್ರವ್ಯೂಹ

(ಪೌರಾಣಿಕ ಏಕಾಂಕ ನಾಟಕ)


ನಾಟಕ ರಚಯಿತರು:

**ಶ್ರೀ| ಬಿ. ಈಶ್ವರಯ್ಯ,**

ಪೆರ್ಲ (ದ. ಕ.)


**1957.**




ಒಂದಾಣೆ ಮಾಲೆ

## ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯು ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1957ನೇ ಜುಲೈ ತಿಂಗಳ ಮೂರನೆಯ ವಾರದ ವರೆಗೆ 1.6 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

146 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 3058 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಅಭಿಮನ್ಯು ಅಥವಾ ಚಕ್ರವ್ಯೂಹ

--------

ಪಾತ್ರಗಳು: ೧. ಶ್ರೀಕೃಷ್ಣ. ೨. ಅರ್ಜುನ. ೩. ಅಭಿಮನ್ಯು. ೪. ಧರ್ಮರಾಯ. ೫. ಸೌಭದ್ರೆ. ೬. ಸುಯೋಧನ. ೭. ದ್ರೋಣಾಚಾರ್ಯ. ೮. ಕರ್ಣ. ೯. ಜಯದ್ರಥ. ೧೦. ಸಮಸಪ್ತಕರು. ೧೧. ಶಲ್ಯ, ದುಶ್ಯಾಸನ ಮತ್ತು ಸೈನಿಕರು ಮೊದಲಾದವರು.

## ದೃಶ್ಯ ೧

[ಸುಯೋಧನನ ಪಾಳೆಯ—ಸುಯೋಧನನು ಉನ್ನತಾಸನದಲ್ಲಿ ಮಂಡಿಸಿರುವನು. ದ್ರೋಣಾಚಾರ್ಯ, ಕರ್ಣ, ಶಲ್ಯ ಮೊದಲಾದವರು ಯೋಗ್ಯತಾನುಸಾರ ಆಸನಗಳಲ್ಲಿ ಕುಳಿತಿರುವರು. ಎಲ್ಲರ ಮುಖಗಳು ಚಿಂತೆಯಿಂದ ಕವಿದಿವೆ.]

ಸುಯೋಧನ: ಪಾಂಡವಪಕ್ಷಪಾತಿಯಾದ ಶ್ರೀಕೃಷ್ಣನು ಪಾಂಡವರ ಪಕ್ಷದಲ್ಲಿ ಇರುವ ವರೆಗೆ ಅವರಿಗೆ ಸೋಲುಂಟಾಗಲಾರದು. ಪಾಂಡವರು ಅನುನಿತ್ಯವೂ ಜಯಭೇರಿಯನ್ನು ಹೊಡೆಯುತ್ತಿರುವರು. ನಮಗಾದರೋ ಪ್ರತಿಯೊಂದೆಡೆಯಲ್ಲಿಯೂ ಅಪಜಯ! ನಮ್ಮ ಕಡೆಯಲ್ಲಿ ಬಲಾಢ್ಯರು ಅನೇಕರಿರುವರು. ಪಾಂಡವರಿಗಿಂತ ಅಕ್ಷೋಹಿಣೀ ಸೇನೆಯೂ ಹೆಚ್ಚು ಇದ್ದು ಏನೂ ಪ್ರಯೋಜನವಾಗಲಿಲ್ಲವೆಂದ ಮೇಲೆ ಇನ್ನೇನು? ವಿನಾಕಾರಣ ಜಗಳ ಕೆದರಿ ವಿದುರನು ಮೊದಲೇ ಬಿಲ್ಲು ಮುರಿದು ಹೊರಟುಹೋದನು. ಯಾದವಪ್ರಭು ಬಲದೇವರು ನಮ್ಮ ಪಕ್ಷದಲ್ಲಿ ಇರುವರೆಂದೂ ಬಹಳ ಧೈರ್ಯಗೊಂಡಿದ್ದೆ. ಕೊನೆಗೆ ಎಲ್ಲವನ್ನೂ ನನ್ನ ಮೇಲೆಯೇ ಹೇರಿ ಇಳೆಯ ಪ್ರದಕ್ಷಿಣೆಗೆಂದು ತೆರಳಿದರು. ಆಜನ್ಮ ಬ್ರಹ್ಮಚಾರಿಯೂ, ಇಚ್ಛಾಮರಣಿಯೂ, ಕುರುಕುಲವೃದ್ಧ ಪಿತಾಮಹನೂ ಎನಿಸಿದ ಭೀಷ್ಮರಿಗೆ ಸೇನಾಧಿಪತ್ಯವನ್ನು ಕಟ್ಟಿದೆ. ಆದರೇನು? ಹತ್ತನೇ ದಿನದ ಆಹವದಲ್ಲಿ ಶಿಖಂಡಿಯಿಂದಾಗಿ, ಛಲದಂಕಮಲ್ಲನೆನಿಸಿದ ಭೀಷ್ಮನಿಗೆ ಶರತಲ್ಪವಾಯಿತು. ಪರಶುಧರನ ಕೂಡೆ ಕಾದಾಡಿ ವಿಜಯ ಸಂಪಾದಿಸಿದ ವೀರನು ಕೇವಲ

ಓರ್ವ ಶಿಖಂಡಿಗೆ ಸೋಲುವುದೆಂದರೆ ಆಶ್ಚರ್ಯವಲ್ಲದೆ ಮತ್ತೇನು? ಎಲ್ಲರೂ ಪಾಂಡವಪಕ್ಷಪಾತಿಗಳು! ಪಿತಾಮಹರ ಮಾತಿನಂತೆ ಪಾಂಡವ ಕೌರವರ ಧನುರ್ವಿದ್ಯಾಗುರುವೂ ಅರಿಭಯಂಕರನೂ ಎನಿಸಿದ ದ್ರೋಣಾಚಾರ್ಯರಿಗೆ ಸೇನಾಧಿಕಾರ ವಹಿಸಿಕೊಟ್ಟೆ. ಆದರೆ ಕೈಗೆ ಸಿಕ್ಕಿದ ಧರ್ಮರಾಯನನ್ನು ಬಿಟ್ಟುಬಿಟ್ಟರು ದ್ರೋಣಾಚಾರ್ಯರು! ಅಪ್ಪರೇ ನಮ್ಮನ್ನು ಇರಿಯುವರು·

ದ್ರೋಣ: ಸುಯೋಧನಾ, ಧರ್ಮಸುತನನ್ನು ಹೆಡೆಮುರಿ ಬಿಗಿದಿರುವೆ ನಲ್ಲವೆ? ನೀನೇ ಕಣ್ಣಾರೆ ಕಂಡು ಇಲ್ಲವೆಂದು ಹೇಳುವಿಯು?

ಸುಯೋ: ಇಲ್ಲವೆಂದವರಾರು ಗುರುದೇವ? ಹಿಡಿದಿರುವಿರಿ. ಆದರೆ ನಿಮ್ಮ ಪ್ರಿಯ ಶಿಷ್ಯ ಅರ್ಜುನನಿಗೆ ಹೆದರಿ ಬಿಟ್ಟುಬಿಟ್ಟರಿ.

ಕರ್ಣ: (ನಗುತ್ತ) ಹೌದು ಪ್ರಭೋ, ನಿನ್ನೆ ನಾನಾಗಬೇಕಿತ್ತು; ಅರ್ಜುನ ಅಥವಾ ಅವನಿಂದಲೂ ಮಿಗಿಲಾದವನು ಬಂದರೂ ಬಿಡುತ್ತಿರ ಲಿಲ್ಲ. ಇವರು ಎಷ್ಟಾದರೂ ಬ್ರಾಹ್ಮಣರಲ್ಲವೇ?

ದ್ರೋಣ: ಪ್ರಭೋ, ನಾನು ಅರ್ಜುನನಿಗೆ ಹೆದರಿ ಆತನನ್ನು ಬಿಟ್ಟೆ ನೆನ್ನುವಿಯಾ? ಧರ್ಮವೇ ಸಾಕಾರವಾಗಿ ಮೂರ್ತಿಭವಿಸಿರುವ ರಾಜಶಿರೋ ಮಣಿ ಧರ್ಮಜನಿಗೆ ನಾನು ಕಳಂಕವನ್ನು ತರಲೇ? ನಿರಾಯುಧನಾದವ ನೊಡನೆ ಕಾದಾಡಿ ಬಂಧಿಸಬೇಕೆ? ಸರ್ವಶಾಸ್ತ್ರಕೋವಿದನಾದ ನಾನಂತೂ ಆತನಿಗೆ ಕಳಂಕವನ್ನು ತರಲಾರೆ. ಅನ್ಯಥಾ ಯೋಚಿಸಬೇಡ.

ಸುಯೋ: ಗುರುದೇವಾ, ಅಂತೂ 'ಕೊಡಲಿ ಕಾವು ಕುಲಕ್ಕೇ ಕೇಡು' ಎಂಬಂತೆ ವರ್ತಿಸಿದಿರಿ.

ದ್ರೋಣ: ಸುಯೋಧನಾ, ವ್ಯರ್ಥವಾಗಿ ನನ್ನನ್ನು ಹೀಯಾಳಿಸದಿರು. ಇದೋ, ನನ್ನ ಪ್ರತಿಜ್ಞೆಯನ್ನು ಲಾಲಿಸು. ನಾಳಿನ ಸಮರದಲ್ಲಿ ಪಾಂಡವ ರಲ್ಲಿ ಒಬ್ಬರನ್ನು ಅಥವಾ ಪಾಂಡವರ ವಂಶಜನೊಬ್ಬನನ್ನು ವಧಿಸದೆ ವಿರ ಮಿಸಲಾರೆ. ತಿಳಿಯಿತಲ್ಲವೇ?

ಕರ್ಣ: ರಾಜೇಂದ್ರಾ, ಈ ಹಾರುವರು ಎಲ್ಲಿ ಮೃಷ್ಟಾನ್ನಭೋಜನ ವಿದೆ, ಯಾರು ಕೈತುಂಬಾ ದಕ್ಷಿಣೆಕೊಡುವರು ಎಂದು ಹುಡುಕಲು ಆಗು ವರಲ್ಲದೆ ಕ್ಷತ್ರಿಯರಲ್ಲಿ ನಡೆಯತಕ್ಕ ಯುದ್ಧವಿದ್ಯಾನೈಪುಣ್ಯತೆಯೇನು ಬಂದೀತು?

ದ್ರೋಣ: (ಸಿಟ್ಟಿನಿಂದ) ಎಲಾ ಸೂತಕುಮಾರ! 'ಸ್ವಭಾವಮನುವರ್ತಂತೇ ಪಾಂಡಿತ್ಯಂ ಕಿಂ ಕರಿಷ್ಯತಿ' ಎಂಬಂತೆ ಎಷ್ಟು ಪಂಡಿತನಾದರೂ 'ಹುಟ್ಟುಗುಣ ಗಟ್ಟ ಹತ್ತೀತೇ?' ನಿನ್ನ ಸ್ವಭಾವವನ್ನು ಮೊದಲೇ ಅರಿತವರಾದ ನಮ್ಮೆದುರಿನಲ್ಲಿ ವಿಟಪುರುಷರು ವೇಶ್ಯಾಸ್ತ್ರೀಯರ ಮುಂದೆ ಪೌರುಷ ಕೊಚ್ಚಿಕೊಂಡಂತೆ' ಯಾರ ಮೆಚ್ಚುಗೆಗಾಗಿ ಗಳಹುವಿಯೋ ಮತಿಹೀನ?

ಕರ್ಣ: ದಕ್ಷಿಣೆ ಭೋಜನಗಳಿಂದಲೇ ಜೀವಿಸುತ್ತಿರುವ ವಿಪ್ರಕುಲಜರಿಗೆ ನಮ್ಮಂತಹ ವೀರಪುರುಷರ ಧೀರತ್ವದ ನೆಲೆಯಾದರೂ ಏನು ತಿಳಿದೀತು?

ದ್ರೋಣ: ಏನು, ಬೆಸ್ತಕುಮಾರನಾದ ನೀನು ಧೀರನೇ? ಗಂಧರ್ವಪತಿ ಚಿತ್ರಸೇನನ ಬಾಣಗಳಿಗೆ ಅಂಜಿ ಓಡಿಹೋದ ಜೀವಗಳ್ಳನು ಭಾರತಾಹವದಲ್ಲಿ ಪ್ರತಾಪಶಾಲಿಯುಲ್ಲವೇ? ಪಾಂಡವರು ವಿರಾಟನಗರದಲ್ಲಿರುವಾಗ ಅವರ ಪರಿಚಿತಿಯನ್ನು ಕಂಡುಹಿಡಿಯಲು ಉತ್ತರದಿಕ್ಕಿನಲ್ಲಿ ಗೋವುಗಳನ್ನು ಬಂಧಿಸಿದಾಗ ತ್ರೈಲೋಕವೀರನಾದ ಪಾರ್ಥನ ಬಾಣಗಳಿಗೆ ದಿಕ್ಕೆಟ್ಟು ಓಡಿದ ಭಾರ್ಗವನ ಶಿಷ್ಯ ಇಂದು ಧೀರನು ಅಲ್ಲವೇ? ಕರ್ಣ! ಭಾನುಮತಿಯ ಕಲ್ಯಾಣ ಸಮಯದಲ್ಲಿ ನಿನ್ನ ರಾಜನನ್ನು ಸೆರೆಯಲ್ಲಿ ಸಿಲುಕುವಂತೆಸಗಿ ಓಡಿದ ಮಹಾವೀರನು—ದಾನಶೂರ ಕರ್ಣನು—ನೀನಲ್ಲವೇನಯ್ಯಾ?

ಕರ್ಣ: ಬ್ರಾಹ್ಮಣಾ! ಈ ಮೂರು ಸಂದರ್ಭಗಳಲ್ಲಿಯೂ ನೀನೂ ನಮ್ಮೊಡನೆ ಇದ್ದು, ಬೆನ್ನಿಗೆ ಕಾಲ್ಗೊಟ್ಟ ಬ್ರಾಹ್ಮಣನೂ ನೀನಲ್ಲವೇ? ನೀನಾದರೂ ಖಾಡಾಕಾಡಿ ಬವರಕೊಟ್ಟು ರಾಜನನ್ನು ಬಿಡಿಸಬಾರದಿತ್ತೇ? ನಿನಗೆ ನನ್ನ ಸಾಮರ್ಥ್ಯವನ್ನು ಇಲ್ಲಿಯೇ ತೋರಿಸುವೆನು ಬಾ, ಯುದ್ಧಕ್ಕೆ ಸನ್ನದ್ಧನಾಗು. (ಖಡ್ಗ ಹಿರಿಯುವನು.)

ದ್ರೋಣ: ಎರಡರಲ್ಲೀಗ ಒಂದು ಇಲ್ಲಿಯೇ ನಿರ್ಣಯವಾಗಲಿ. ಸಿದ್ಧನಾಗು. (ಕತ್ತಿ ಹಿರಿಯುವನು. ಇಬ್ಬರೂ ಏಳುವರು. ಆಗ ಕೌರವನು ಇಬ್ಬರನ್ನೂ ಸಂತೈಸುವನು.)

ಸುಯೋ: ಆಹಾ, ಇದೇನನ್ನು ನಡೆಸಿರುವಿರಿ? ಗುರುದೇವಾ! ಮಿತ್ರಾ, ಕರ್ಣ! ಶಾಂತರಾಗಿರಿ. ವಿರೋಧಿಸಮ್ಮುಖದಲ್ಲಿ ಮೆರೆಸಬೇಕಾದ ಪೌರುಷವನ್ನು ಇಲ್ಲಿ ತೋರಿಸದಿರಿ. ನಿಮ್ಮೊಳಗೇ ಕಾದಾಟವೇ? (ಕರ್ಣ, ದ್ರೋಣರು ಶಾಂತರಾಗಿ ಆಸನದಲ್ಲಿ ಕುಳಿತುಕೊಳ್ಳುವರು.) ಆಚಾರ್ಯರೇ, ಆದಾವ ರೀತಿ ನಾಳೆ ಜಯ ದೊರಕಿಸುವಿರಿ?

ದ್ರೋಣ: ರಾಜನ್, ನಾಳಿನ ಸಮರದಲ್ಲಿ ಬ್ರಹಸ್ಪತಿಪ್ರಣೀತವಾದ ಚಕ್ರವ್ಯೂಹವನ್ನು ರಚಿಸಿ ಶತ್ರುಗಳನ್ನು ಧೂಳೀಪಟಮಾಡುವೆನು:

ಸುಯೋ: ವ್ಯೂಹಭೇದನ ಆರಿಂದಲೂ ಸಾಧ್ಯವಿಲ್ಲವೇ?

ದ್ರೋಣ: ಬಲಭದ್ರ, ಕೃಷ್ಣ-ಪಾರ್ಥರು— ಇವರಿಷ್ಟೇ ಜನರಿಗೆ ತಿಳಿದಿರುವುದು.

ಸುಯೋ: ಹಾಗಾದರೆ ಗೆಲುವ ದಾರಿಯೇ ಇಲ್ಲ. ಕೃಷ್ಣ-ಪಾರ್ಥರು ವ್ಯೂಹವನ್ನು ಒಡೆಯದೆ ಇರಲಾರರು.

ದ್ರೋಣ: ಚಿಂತಿಸದಿರು ಕೌರವಾ, ಕೃಷ್ಣ ಪಾರ್ಥರು ಇತ್ತ ಸುಳಿಯದಂತೆ ಮಾಡಲು, ನಿನ್ನ ಸ್ನೇಹಿತರಾದ ಸಮಸಪ್ತಕರನ್ನು ಅವರ ಮೇಲೆ ಕದನಕ್ಕೆ ಕಳುಹಬೇಕು.

ಸುಯೋ: ಸಮಸಪ್ತಕರು ನನ್ನ ಪರಮಸ್ನೇಹಿತರು, ಅರ್ಜುನನ ಕಡುವಿರೋಧಿಗಳು. ಯಾರಲ್ಲಿ? ಸಮಸಪ್ತಕರು ಬರುವಂತೆ ಹೇಳಿ!

(ಸಮಸಪ್ತಕರು ಪ್ರವೇಶಿಸುವರು.)

ಸಮ: ರಾಜನ್, ನಮಸ್ಕಾರ!

ಸುಯೋ: ಮಿತ್ರವರ್ಯರೇ, ಈ ಆಸನದಲ್ಲಿ ಮಂಡಿಸೋಣಾಗಲಿ. (ಕೌರವನು ತೋರಿಸಿದ ಆಸನದಲ್ಲಿ ಕುಳಿತುಕೊಳ್ಳುವರು.)

ಸಮ: ಮಿತ್ರ, ಈ ನಡು ಇರುಳಿನಲ್ಲಿ ನಮ್ಮನ್ನು ಕರೆಯುಕಳುಹಲು ಕಾರಣವೇನು?

ಸುಯೋ: ಮಿತ್ರವರ್ಯರೇ, ಘನತರವಾದ ಕಾರ್ಯವಿದ್ದೇ ನಿಮ್ಮನ್ನು ಬರಮಾಡಿರುವೆನು. ನಮ್ಮ ದಾಯವಾದಿಗಳಾದ ಆ ಖೂಳ ಪಾಂಡವರಲ್ಲಿ ಕದನವನ್ನು ಹೂಡಿರುತ್ತೇನೆ. ಹತ್ತನೇ ದಿವಸದ ಬವರದಲ್ಲಿ ಗಂಗಾಸುತ ಭೀಷ್ಮರಿಗೆ ಸರಳಮಂಚವಾಯಿತು. ಅವರ ಅನುಜ್ಞೆಯಂತೆ ರಿಪುತಿಮಿರ ಮಾರ್ತಾಂಡರಾದ ಗುರುವರ್ಯರಿಗೆ ಸೇನಾಧಿಕಾರವನ್ನು ವಹಿಸಿಕೊಟ್ಟೆ. ನಾಳೆಯ ಸಂಗರದಲ್ಲಿ ಆಚಾರ್ಯರು ಚಕ್ರವ್ಯೂಹವನ್ನು ರಚಿಸಿ, ಶತ್ರುಗಳನ್ನು ಹಿಮ್ಮೆಟ್ಟಿಸುವರಂತೆ. ಆದರೆ, ಅದಕ್ಕೊಂದು ತೊಡಕಿದೆ. ಅದನ್ನು ನಿವಾರಿಸುವುದು ನಿಮ್ಮಗಳ ಕೆಲಸ.... .......

ಸಮ: ಕೌರವೇಶ್ವರಾ, ಕಂಟಕವಾದರೂ ಏನು?

ಸುಯೋ: ಸಖರೇ, ವ್ಯೂಹಭೇದನಕ್ಕೆ ಸಮರ್ಥರಾದ ಪಾರ್ಥ-ಕೃಷ್ಣರನ್ನು ನಾಳೆ ಉದಯದಿಂದ ಅಸ್ತಮಾನದ ಪರಿಯಂತರ, ಇತ್ತ ಸುಳಿಯದಂತೆ ಎಸಗುವುದು ನಿಮ್ಮ ಕೆಲಸ.

ಸಮ: ಕುರುಕುಲಾಂಬುಧಿಚಂದ್ರಮನೇ, ಇದೇನು ಮಹತ್ತರವಾದ ಕೆಲಸ! ಪಾರ್ಥ-ಕೃಷ್ಣರೇಕೆ? ಕುಲಾದ್ರಿಗಳನ್ನೇ ಕಿತ್ತುಬಿಸಾಡಬಲ್ಲೆವು. ಚಂದ್ರ-ಸೂರ್ಯರ ಸಂಚಾರವನ್ನೇ ನಿಲ್ಲಿಸಿಬಿಡುವೆವು. ಈಶನ ಕರುಣೆಯು ನಮ್ಮಗಳ ಮೇಲಿರುವ ವರೇಗೆ ನಮಗೆ ಭಯವೆಂಬುದೇ ಇಲ್ಲ. ಅಲ್ಲದೆ ನಮ್ಮಯ ತಂದೆಯವರ ನಾಶಕ್ಕೆ ಹೇತುವಾದ ವಿಜಯನ ಶಿರಸ್ಸನ್ನು ಧರಾತಳದಲ್ಲಿ ಹೊರಳಾಡಿಸಿ, ಆತನ ರಕುತದಲ್ಲಿ ತಾತರಿಗೆ ತರ್ಪಣವನ್ನು ಬಿಡದಿದ್ದರೆ ನಾವು ಹುಟ್ಟಿದ್ದು ವ್ಯರ್ಥ. ಪಾಂಡವಮಧ್ಯಮನನ್ನು ನಮಗೆ ಬಿಟ್ಟು ಉಳಿದ ನಾಲ್ವರನ್ನು ಗೆಲಿದು ನಿನ್ನ ಮನದಭಿಲಾಷೆಯನ್ನು ತೀರಿಸಿಕೊಳ್ಳು.

ಸುಯೋ: ಸಖ ಶ್ರೇಷ್ಠರೇ, ಇದೋ ತೊಂಬಟ್ಟಲಲ್ಲಿ ರಣವೀಳ್ಯವನ್ನು ನೀಡಿರುತ್ತೇನೆ. ಇದನ್ನು ಸ್ವೀಕರಿಸಿ, ನಾಳಿನ ಸಮರಕ್ಕೆ ಪಾರ್ಥ-ಕೃಷ್ಣರನ್ನು ಆಹ್ವಾನಿಸಲು ದೂತರನ್ನಟ್ಟಿ. (ರಣವೀಳ್ಯವನ್ನು ಸುಯೋಧನನು ಕಯ್ಯಾರೆ ದಾನವರಿಗೆ ನೀಡುವನು. ದಾನವರು ಸ್ವೀಕರಿಸಿ,)

ಸಮ: ಅಂತೆಯೇ ಆಗಲಿ. ನಾಳೆ ನಿನ್ನ ಕೀರ್ತಿ ಕೌಮುದಿಯು ದಿಗ್ದೆಸೆಗಳಲ್ಲಿಯೂ ಬೆಳಗಲಿ! ನಾವಿನ್ನು ವಿಶ್ರಾಂತ್ರಿಗೆ ತೆರಳುವೆವು. (ದಾನವರು ತೆರಳುವರು).

ಸುಯೋ: ಅಂತೆಯೇ ಆಗಲಿ. ಆಚಾರ್ಯರೇ, ಇನ್ನೇನು, ಯೋಚನೆ ನಿಮ್ಮದು? ನಮ್ಮ ಕಂಟಕವು ನಿವಾರಣೆಯಾಯಿತಲ್ಲವೇ?

ದ್ರೋಣ: ಕೌರವಾ, ನಮ್ಮ ದಾರಿಯು ಸುಗಮವಾಯಿತು. ನಾಳೆ ನನ್ನ ಪರಾಕ್ರಮವನ್ನು ಕಂಡು ನೀನೇ ಸಂತೋಷಪಡು. ಚಕ್ರವ್ಯೂಹ ಕದನಕ್ಕೆ ನಾಳೆ ಪಾಂಡವರಲ್ಲಿಗೆ ದೂತರನ್ನು ಅಟ್ಟೋಣ. ಇನ್ನು ವಿಶ್ರಾಂತಿಗೆ ತೆರಳೋಣವೇ?

ಸುಯೋಧನ: ಕೃತಾರ್ಥನಾದೆನು ಗುರುವೇವಾ.

(ಪರದೆ).

## ದೃಶ್ಯ ೨

ಕುರುಕ್ಷೇತ್ರದ ಒಂದು ಭಾಗ—ಸುಯೋಧನ, ದ್ರೋಣಾಚಾರ್ಯ, ಜಯದ್ರಥ ಮೊದಲಾದವರು ಇರುವರು.]

ದ್ರೋ: ಕೌರವಾ, ಕೃಷ್ಣಾರ್ಜುನರು ಬೇರ್ಪಟ್ಟರಷ್ಟೇ?

ಸುಯೋ: ಅವರಿತ್ತ ಸುಳಿಯದಂತೆ, ಸಮಸಪ್ತಕರು ಯುದ್ಧವನ್ನು ಪ್ರಾರಂಭಿಸಿಯೇ ಬಿಟ್ಟಿರುವರು. ವ್ಯೂಹರಚನೆಯೇನಾಯಿತು?

ದ್ರೋಣ: ಕುರುಸಾರ್ವಭೌಮ, ವ್ಯೂಹವೇನೋ ಸಿದ್ಧವಾಯಿತು. ಆದರೆ ಅದರ ದ್ವಾರರಕ್ಷಣೆಗೆ ಓರ್ವ ಬಲಾಢ್ಯನ ಅವಶ್ಯಕತೆಯಿದೆ. ಯಾರನ್ನು ನೇಮಿಸಬೇಕೆಂದು ಆಲೋಚಿಸುತ್ತಿರುವೆ?

ಸುಯೋ: ಭಾವ,—ದುಶ್ಶಲೆಯ ಪತಿ ಜಯದ್ರಥರಿರುವಾಗ ಬೇರಿನ್ನಾರ ಅವಶ್ಯಕತೆಯಿದೆ? ಪಾಂಡವರ ನಾಶಕ್ಕೆ ಅವರು ಈಶನನ್ನು ಒಲಿಸಿ ವರಪಡೆದಿರುವ ವಿಚಾರ ಸರ್ವವಿದಿತವಿದೆ.

ಜಯ: ಭಾವಾ, ಕೌರವೇಶ್ವರಾ, ಪಾಂಡವರ ನಾಶಕ್ಕೆ ಬದ್ಧಕಂಕಣನಾಗಿರುವೆನು. ಆ ಭೀಮನು ಎಸಗಿದ ಅಪಮಾನವನ್ನು ಇಷ್ಟು ಬೇಗನೇ ಮರೆಯುವೆನೇ? ತೆರಳೋಣವೇ?

ದ್ರೋಣ: ಕುರುಪ್ರಭೋ, ಇಂತಹ ಬಲಶಾಲಿಗಳಿರುವಾಗ ಮತ್ತೇನು? ಈಗಲೇ ತೆರಳೋಣ. ಜಯವಂತೂ ನಮ್ಮೆಡೆಗೆ ಸಿದ್ಧ.

ಸುಯೋ: ಹುಂ, ಎಲ್ಲವೂ ನಿಮ್ಮ ಹೆಗಲ ಮೇಲಿದೆ. (ಪರದೆ.)

## ದೃಶ್ಯ ೩

[ಪಾಂಡವರ ಶಿಬಿರ—ಏಕಾಂಗಿಯಾಗಿ ಧರ್ಮಜನು ಶೋಕಿಸುತ್ತಿರುವನು.]

ಧರ್ಮರಾಯ: ಹರಿಧನಂಜಯರು ದಾನವರೊಡನೆ ಕಾಳಗಕ್ಕೆ ತೆರಳಿರುವರು. ಗುರುಗಳು ಅಭೇದ್ಯವಾದ ಚಕ್ರವ್ಯೂಹವನ್ನು ರಚಿಸಿ, ದೂತನ ಮೂಲಕ 'ಧರ್ಮತನಯಾ, ಹನ್ನೆರಡನೆಯ ದಿನದ ಕಾಳಗದಲ್ಲಿ ನಾವು ಚಕ್ರವ್ಯೂಹವನ್ನು ರಚಿಸಿರುತ್ತೇವೆ. ನಿಮ್ಮಲ್ಲಿ ಕದನಶಾಲಿಗಳು ಇದ್ದರೆ, ಅವರು ಬಂದು ಈ ವ್ಯೂಹವನ್ನು ಮುರಿದು ಜಯಶಾಲಿಗಳಾಗತಕ್ಕದ್ದು. ಇಲ್ಲವೇ ಹಿಂದಿನಂತೆ ಕಾನನಕ್ಕೆ ತೆರಳಬೇಕು' ಎಂಬ ವಾರ್ತೆಯನ್ನು ಕಳುಹಿಸಿರುವರು. ವ್ಯೂಹಭೇದನಕ್ಕಾಗಿ ಕಲಿಘಟೋದ್ಗಜ, ನಕುಲ, ಧುರವಿಜಯ

ಸಾತ್ಯಕಿ, ವಿರಾಟ, ಕುಂತೀಭೋಜ, ಭುವನ ಪ್ರಾಣಕುಮಾರನೆಂದು ಲೋಕ ಲೋಕಗಳಲ್ಲಿ ಪ್ರಸಿದ್ಧಿಗೊಂಡ, ವೀರಪುರುಷರ, ಸಾವಿರ ಮದಗಜಗಳ ಬಲಶಾಲಿ ಭೀಮಸೇನನೂ, ಭಗ್ನಮನೋರಥರಾಗಿ ಹಿಂದಿರುಗಿದರೆಂದರೆ, ಆಶ್ಚರ್ಯ. ಹಾ ವಿಧಿಯೇ! ವ್ಯೂಹಭೇದನ ಮಾಡುವವರು ಆರೂ ಇಲ್ಲವೇ? ಈ ವ್ಯೂಹಭೇದನ ಮಾಡದಿದ್ದರೆ ಜೀವಿಸಿ ಫಲವೇನು? ವ್ಯೂಹದ ರಹಸ್ಯ ವನ್ನು ತಿಳಿದಿರುವ ಕೃಷ್ಣ, ಪಾರ್ಥ, ಬಲರಾಮರೂ ಈ ಸಮಯದಲ್ಲಿ ಇಲ್ಲ ವಲ್ಲ! ಆದರೆ, ಕುಮಾರ ಅಭಿಮನ್ಯು ಒಳಪ್ರವೇಶ ಮಾತ್ರ ಅರಿಯುವನಲ್ಲದೆ ಒಳರಹಸ್ಯವನ್ನು ಅರಿಯಲಾರನು. ಅರಿತರೂ, ಚಿಕ್ಕ ಮಗುವನ್ನು ಹೇಗೆ ಕಳುಹಲಿ? ಹಾ ವಿಧಿಯೇ! ಇಂತಹ ಇಬ್ಬಗೆಯ ಸಂಕಟವನ್ನು ತಂದೊಡ್ಡಿ ದೆಯಲ್ಲವೆ? ಭಕ್ತವತ್ಸಲಾ! ಶ್ರೀಹರಿ!! [ವೀರ ಅಭಿಮನ್ಯುವಿನ ಪ್ರವೇಶ]

ಅಭಿಮನ್ಯು: (ಪ್ರವೇಶಿಸಿ) ಬಾಲಕ ಅಭಿಮನ್ಯುವಿನ ವಂದನೆಗಳು.

ಧರ್ಮ: ಧೀರೋದ್ಧತನಾಗು ಕುವರ!

ಅಭಿ: ಪೂಜ್ಯರೆ, ಇದೇನು ನಿಮ್ಮ ಮುಖಾರವಿಂದವು ಬಾಡಿರುವುದು?

ಧರ್ಮ: ಬಾಲಕನಾದ ನಿನ್ನಲ್ಲಿ ಶೋಕಾತುರವನ್ನು ಹೇಳಿ ಪ್ರಯೋ ಜನವೇನು? ಹೋಗು ಮಗೂ, ಕೆಳೆಯರೊಡನೆ ಚಿನ್ನಾಟವನ್ನುಆಡುತ್ತಿರು.

ಅಭಿ: ಹಿರಿಯಯ್ಯನೇ, ನನ್ನಿಂದಾಗುವ ಕಾರ್ಯವಾದರೆ ನಿಮ್ಮ ಶೋಕಾಗ್ನಿಯನ್ನು ನಂದಿಸುವೆನು. ಅಪ್ಪಾ, ನನ್ನಲ್ಲಿ ಹೇಳಬಾರದೇ?

ಧರ್ಮ: ಕುವರ, ಕೌರವನು ಸಾಮದಿಂದ ರಾಜ್ಯವನ್ನು ಕೊಡಲೊ ಪ್ಪದೆ ರಣಕ್ಕೆ ನಿರ್ಧಾರವೀಳ್ಯವನ್ನು ದಯಪಾಲಿಸಿದಾಗಲೇ ನನ್ನ ಚಿಂತೆಗೆ ಆರಂಭವಾಗಿದೆ. ಈ ದಿವ ನಿನ್ನಪ್ಪ ಮತ್ತು ದೇವರದೇವ ಕೃಷ್ಣನು ದಾನವ ರುಗಳೊಡನೆ ಕಾಳಗಕ್ಕೆ ತೆರಳಿರುವರು. ಇತ್ತ ಕಲಶಜನು ಚಕ್ರವ್ಯೂಹ ವನ್ನು ನಿರ್ಮಿಸಿ, ಸಂಗರಕ್ಕೆ ಕರೆದಿರುವನು. ನಮ್ಮೆಡೆಯ ವೀರರು ಕೈಲಾ ಗದೆ ಹಿಮ್ಮೆಟ್ಟಿರುವರು. ವ್ಯೂಹಭೇದನ ಮಾಡಲಾಗದಿದ್ದರೆ ಸೋತಂತೆಯೆ!

ಅಭಿ: ನಮಗೆ ವಿಹಿತವಾಗಿ ಬರತಕ್ಕ ರಾಜ್ಯಾಂಗವನ್ನು ಸಾಮದಿಂದ ಕೊಡಲಿಕ್ಕೆ ಸಮ್ಮತಿಸದೆ ಕುಟಿಲ ನೀತಿಗಳಿಂದ ನಮ್ಮನ್ನು ಅಂಡಲೆಯು ವಂತೆಸಗಿದ ಆ ಪಾಪಿ ಕೌರವನನ್ನೂ ಕೌರವಾನುಜರನ್ನೂ ಈಗಲೇ ಯಮ ಸದನಕ್ಕಟ್ಟಿ ಬರುವೆನು. ಕೊಡಿ ಅನುಜ್ಞೆಯನ್ನು.

ಧರ್ಮ: (ಅಭಿಮನ್ಯುವನ್ನು ಮುದ್ದಿಸುತ್ತಾ) ವತ್ಸಾ, ಅಭಿಮನ್ಯು, ನೀನೂ ಯುದ್ಧಕ್ಕೆ ತೆರಳುವೆಯಾ? ನನ್ನ ಕಣ್ಮಣಿ! ಕದನವೆಂದರೆ ನೀನು ಏನೆಂದು ತಿಳಿದುಕೊಂಡಿರುವೆ? ಬೇಡ, ನಿನಗೆ ಯುದ್ಧ ಬೇಡ!

ಅಭಿ: ಅಪ್ಪಾ, ರಿಪುಭಯಂಕರನೆಂದು ಲೋಕಗಳಲ್ಲಿ ಬಿರುದನ್ನೆ ಪಡೆದಿರುವ ಪಾರ್ಥಕುವರನು ರಣಹೇಡಿಯೆಂದು ಭಾವನೆಯೇ? ನರನರಗಳಲ್ಲಿ ಕ್ಷತ್ರಿಯ ರಕ್ತವು ಹರಿಯುತ್ತಿರುವಾಗ, ವೈಶ್ಯಸುತನಂತೆ ಸುಮ್ಮಗಿರಲೇ? ರಣಕ್ಕೆ ಬೆನ್ನು ತಿರುಗಿಸಲೇ? ವೀರೋಚಿತವಾದ ಮಾತೇ ನಿಮ್ಮದು?

ಧರ್ಮ: ಮಗೂ, ವೀರಪುರುಷನ ಮಗನು ನೀನಹುದು. ಆದರೆ, ಯುಕ್ತಾಯುಕ್ತ ವಿವೇಚನೆಬೇಡವೇ? ಚಕ್ರವ್ಯೂಹ ಕದನದ ಮಾತಿದು. ಅದರ ರಹಸ್ಯವನ್ನು ತಿಳಿದವರೇ ಅಗಬೇಕಲ್ಲದೆ ಬೇರೆಯವರಿಂದ ಅಸಾಧ್ಯ. ಮಗೂ, 'ಧಗಧಗಿಸುತ್ತಿರುವ ಅಗ್ನಿಯು' ಒಳಹೊಕ್ಕು ಹಿಂತಿರುಗಬಹುದು! 'ಕಾಳೋರಗನ ಹೆಡೆ'ಯಲ್ಲಿ ನರ್ತಿಸಲೂ ಸಾಧ್ಯವಿದೆ!! ಆದರೆ, 'ಚಕ್ರವ್ಯೂಹ'ದ ಒಳಹೊಕ್ಕು ಹಿಂತಿರುಗಿ ಬರುವುದೆಂದರೆ ಕನಸಿನ ಮಾತು!!!!

ಅಭಿ: ಅಪ್ಪಾ, ತಂದೆ ಪಾರ್ಥರಿಂದ ತಕ್ಕಷ್ಟು ವ್ಯೂಹರಹಸ್ಯ, ಯುದ್ಧ ವಿದ್ಯಾನೈಪುಣ್ಯತೆಗಳನ್ನು ಪಡೆದಿರುವೆನು. ವೀರ ವಿಕ್ರಮಿಯಾದವನನ್ನು ಅಡ್ಡಗಟ್ಟೆ ವೈರಿಗಳು ಬದುಕುವರೇ? ವ್ಯೂಹಕದನಕ್ಕೆ ನಾವು ತೆರಳದಿದ್ದರೆ ನಮ್ಮ ಪಾಲಿಗೆ ಕಾನನವೇ ಗತಿಯಲ್ಲವೇ? ನನ್ನ ಮೇಲಿನ ಮಮತೆಯನ್ನು ಒಂದು ಕ್ಷಣ ಬದಿಗಿರಿಸಿ ರಣಕ್ಕೆ ಹೊರಡಲು ಆಶೀರ್ವದಿಸಿರಿ.

ಧರ್ಮ: ಮಗೂ, 'ನಭದಲ್ಲಿ ನವಗ್ರಹಗಳಿರುವಂತೆ' ಕರ್ಣ ದ್ರೋಹರು ಮೊದಲಾದವರು ಒಗ್ಗಟ್ಟಿನಲ್ಲಿರುವ ವ್ಯೂಹಮಧ್ಯಕ್ಕೆ ಪ್ರವೇಶಿಸಿದ ಪರಶಿವನಿಗೂ ಹೊರಬರಲು ಅಸಾಧ್ಯ. ಆದರೂ ಛಲಹಿಡಿಯುತ್ತಿರುವಿ. ಇರಲಿ. ನಾನು ಮಾತ್ರ ಪಾರ್ಥನಿಲ್ಲದ ವೇಳೆಯಲ್ಲಿ ನಿನ್ನನ್ನು ಕಳುಹಲಾರೆ.

ಅಭಿ: ಅಪ್ಪಾ, ನಮ್ಮ ವಂಶಕ್ಕೆ ಕಳಂಕಬರಬಾರದು ಎಂದು ತಿಳಿದು ನಾನು ಆಹವಕ್ಕೆ ತೆರಳಲು ನಿಮ್ಮನುಜ್ಞೆಯನ್ನು ಬೇಡುತ್ತಿದ್ದೇನೆ. ಎಷ್ಟು ಕೇಳಿದರೂ ಬೇಡವೆಂದೇ ಹೇಳುವಿರಿ. ವೀರರಿಗೆ ಇದು ಯೋಗ್ಯ ಮಾತಲ್ಲ. ಪಾರ್ಥಕುಮಾರನು ಹೇಡಿಯಂತೆ ಮನೆಯಲ್ಲಿ ಕುಳಿತಿರಲಾರನು. ಸಂಗರಕ್ಕೆ ವೀಳ್ಯವನ್ನು ದಯಪಾಲಿಸಿರಿ.

ಧರ್ಮ: ಮಗೂ, ಎಷ್ಟು ಹೇಳಿದರೂ ನೀನು ಕೇಳಲೊಲ್ಲೆ. ಆಗಲಿ. ನಿನ್ನ ಮನೋಭಿಲಾಷೆಯನ್ನು ತೀರಿಸಲು ಎಡೆಯನ್ನು ಕೊಡುತ್ತೇನೆ. ಇದೋ, ಪೊಂಬಟ್ಟಲಲ್ಲಿ ರಣವೀಳ್ಯವನ್ನು ನೀಡಿರುತ್ತೇನೆ. ಜಯಲಲನೆಯನ್ನು ವರಿಸಿಕೊಂಡು ಹಿಂತಿರುಗು. (ಆಶೀರ್ವದಿಸಿ ಕಳುಹಿಸುವನು.) ಹಾಯ್! ಅರಿಯದ ಬಾಲಕನನ್ನು ಸಂಗ್ರಾಮಕ್ಕೆ ಕಳುಹಿಸಿದೆ! ಏನಾಗುವುದೋ ಯಾರು ಬಲ್ಲ! (ಪರದೆ)

## ದೃಶ್ಯ ೪

[ಸುಭದ್ರೆಯ ಅಂತಃಪುರ. ಅಭಿಮನ್ಯುವಿನ ಪ್ರವೇಶ.]

ಅಭಿಮನ್ಯು: ಅಮ್ಮಾ, ಬಾಲಕನನ್ನು ಆಶೀರ್ವದಿಸು!

ಸುಭದ್ರೆ: ಆಯುಷ್ಯವಂತನಾಗು ಮಗು! ಎದ್ದೇಳು. ಇದೇನು? ಪ್ರಯಾಣಸನ್ನದ್ಧನಾಗಿರುವಂತಿದೆಯಲ್ಲ!

ಅಭಿ: ಜನನೀ, ಯುದ್ಧದ ಹನ್ನೆರಡನೆಯ ದಿನದಲ್ಲಿ ದ್ರೋಣರು ಚಕ್ರವ್ಯೂಹವನ್ನು ನಿರ್ಮಿಸಿರುವರು. ಅದನ್ನು ಭೇದಿಸಲು ಹೊರಟಿರುವೆನು. ಪಾರ್ಥ-ಕೃಷ್ಣರು ಆಗಲೆ ಇನ್ನೊಂದೆಡೆಗೆ ತೆರಳಿರುವರು. ಹಾಗಾಗಿ ಧರ್ಮಪ್ಪನವರಿಂದ ಧುರವೀಳ್ಯವನ್ನು ಪಡೆದು, ನಿನ್ನಾಶೀರ್ವಾದಕ್ಕಾಗಿ ಇತ್ತ ಬಂದಿರುವೆನು. ಜಯದಾರತಿಯನ್ನು ಬೆಳಗಿ, ಕಳುಹು.

ಸುಭದ್ರೆ: ಏನು? ಯುದ್ಧಕ್ಕೆ ತೆರಳುವೆಯಾ! ಬಾಲಕನಿಗೆ ಯುದ್ಧ ಪಾತಕವೇ! ಇದೇನು ಭ್ರಮೆ? ಕಂದಾ, ನಿನಗೆ ಏಕೆ ಈ ಕೆಟ್ಟ ಯೋಚನೆಯು ಬಂತು? ಮರಣವೆಂದರೆ ಪ್ರೀತಿಯೋ? ಭಾವ ಧರ್ಮಜನು ಅರಿಯದ ಬಾಲಕನನ್ನು ರಣಕ್ಕೆ ಕಳುಹುವಷ್ಟು ನಿರ್ದಯಿಗಳಾದರೇ? ಬೇಡ ಕಂದಾ.

ಅಭಿ: ಭಯಪಡಬೇಡಿರಿ. ಅಜೇಯನೆನಿಸಿದ ಪಾರ್ಥಕುಮಾರ ಪಾರ್ಥೇಯನು ರಣಭೀರುವೆ? ಕ್ಷತ್ರಿಯರಿಗೆ ವಯಸ್ಸಿನ ಅಂತರವಿಲ್ಲ. ದಯವಿಟ್ಟು ಆಶೀರ್ವದಿಸಿರಿ ಅಮ್ಮಾ!

ಸುಭದ್ರೆ: ಮಗೂ, ಅತಿರಥ ಮಹಾರಥರೆಂದೆನಿಸಿರುವ ದ್ರೋಣ, ಕರ್ಣ ಮುಂತಾದ ರಥಿಕರಿರುವ ವ್ಯೂಹದೊಳಗೆ ತೆರಳುವುದೇ? ನೀನಿನ್ನೂ ಬಾಲಕ.

ಅಭಿ: ವೀರಜನನೀ! ವೃಥಾ ಏಕೆ ದುಃಖಿಸುವೆ? ಗೆದ್ದರೆ ನಿಷ್ಕಂಟಕವಾದ ರಾಜ್ಯ, ಸತ್ತರೆ ವೀರ ಸ್ವರ್ಗ. ಹುಟ್ಟಿದಾರಭ್ಯ ಮನುಜನನ್ನು ಮೃತ್ಯುವು ಹಿಂಬಾಲಿಸುತ್ತಾ ಇರುವಳು. ಈ ನಶ್ವರವಾದ ಶರೀರದ ಮೇಲೆ ಹಂಗೇಕೆ? ಅಮ್ಮಾ, ಅನುಜ್ಞೆಯನ್ನು ನೀಡಿರಿ.

ಸುಭ: ಕುಮಾರ, ಅರಿಯದ ಕಂದಮ್ಮನನ್ನು ಯಾವ ಬಾಯಿಯಿಂದ ಹರಸಿ ರಣಾಂಗಣಕ್ಕೆ ಕಳುಹಲಿ? ಅರಿತೂ ಅರಿತೂ ಮಗುವನ್ನು ಮೃತ್ಯುವಿನ ಕೋರದಾಡೆಗಳಿಗೊಪ್ಪಿಸುವೆನೇ? (ಕಣ್ಣೀರು ಮಿಡಿಯುವಳು. ಅಶ್ರುಧಾರಾಮೃತವನ್ನು ಅಭಿಮನ್ಯುವು ಉತ್ತರೀಯದಿಂದ ಒರೆಸುವನು.)

ಅಭಿ: ವೀರಜನನಿ, ನೀನು ಕೃಷ್ಣನ ಸೋದರಿ! ಈ ರೀತಿ ಕಂಬನಿ ಮಿಡಿಯುವುದೇ? ಸಾಮಾನ್ಯ ಸ್ತ್ರೀಯಂತೆ ದುಃಖಿಸುವುದೇ? ಚಿಂತೆಯನ್ನು ಬಿಟ್ಟು, ಧೀರತೆಯಿಂದ ಜಯದಾರತಿಯನ್ನು ಬೆಳಗಿ ಕಳುಹಿಸಿಕೊಡು.

ಸುಭ: ನಿಲ್ಲು ಕುವರ; ನಿನ್ನ ಶ್ರೇಯಸ್ಸಿಗಾಗಿ ಹಗಲಿರುಳು ಚಿಂತಿಸುತ್ತಿರುವ ನಿನಗೆ ಕೇಡನ್ನು ಬಗೆಯಲಾರೆ. ಮಂಗಳಮಯವಾದ ಜಯದಾರತಿಯನ್ನು ಬೆಳಗುವೆನು. (ಒಳಗೆ ತೆರಳಿ ಆರತಿಯನ್ನು ತಂದು ಬೆಳಗಿ, ಅಕ್ಷತೆಯನ್ನು ಹಣೆಗಿಟ್ಟು) ಸುಕುಮಾರಾ, ಮಂಗಳಮಯನಾದ ಶ್ರೀಹರಿಯು ಸದಾ ನಿನ್ನನ್ನು ರಕ್ಷಿಸಲಿ! ರಣವನ್ನು ಜೈಸಿ, ಜಯನಿನಾದದಿಂದೊಡಗೂಡಿ, ಹಿಂದಿರುಗಿ ಬಾ. ನಿನ್ನ ಕೀರ್ತಿಯೆಂಬ ಕೌಮುದಿಯು ಆಚಂದ್ರಾರ್ಕವಾಗಿ ಬೆಳಗಲಿ! (ಅಭಿಮನ್ಯುವು ತಾಯಿಯ ಪಾದಗಳಿಗೆ ಮಣಿಯುವನು.) (ತೆರೆ.)

## ದೃಶ್ಯ ೫

[ಚಕ್ರವ್ಯೂಹದ ದ್ವಾರ—ಜಯದ್ರಥನು ದ್ವಾರದಲ್ಲಿ ಆಯುಧಪಾಣಿಯಾಗಿ ನಿಂತಿರುವನು. ಅಭಿಮನ್ಯುವಿನ ಪ್ರವೇಶ.]

ಅಭಿ: ಎಲಾ ಜಯದ್ರಥ, ಒಳ್ಳೇ ಮಾತಿನಿಂದ ದಾರಿಬಿಡುವುದು ಹಿತಕರ. ಇಲ್ಲದಿದ್ದರೆ ಯಮಸದನಕ್ಕೆ ತೆರಳಬೇಕಾದೀತು.

ಜಯ: ಓಹೋ, ಬಾಲಕ ಅಭಿಮನ್ಯುವೇ? ಹೊಸದಾಗಿ ಕೋಡುಗಳೆರಡು ಮೂಡಿಬಂದಿವೆಯೋ? ಅಥವಾ, ಆಟದ ಬಯಲೆಂಬ ಭ್ರಾಂತಿಯಿಂದ ರಣಾಂಗಣಕ್ಕೆ ಬಂದೆಯಾ?

ಅಭಿ: ಸೈಂಧವಾ, ತ್ರಿಲೋಕ ವಿಜಯಿಯಾ ಪಾರ್ಥಪುತ್ರನ ಮುಂದಾಡುವಷ್ಟು ಧೈರ್ಯವಿದೆ ತಾನೇ? ನಾನು ಬಾಲಕನಾದರೂ, ನನ್ನ ಕೈಗಳಲ್ಲಿ ಧರಿಸಿರುವ ಈ ಧನುಸ್ಸು-ಬಾಣಗಳಿಗೆ ಬಾಲ್ಯವಿಲ್ಲ. ನಿನ್ನ ವಿಚಾರ ಬಿಡು-ರಣದಲ್ಲಿ ಪರಶಿವನೇ ಎದುರಾದರೂ, ಆತನ ತ್ರಿನಯನಗಳಲ್ಲಿಯೂ ಅಶ್ರುಪ್ರವಾಹವನ್ನೇ ಇಳಿಸಿಯೇ ಬಿಡುವೆನು. ದಾರಿಬಿಡು ಪಾಪಿ!

ಜಯ: ನಿನ್ನ ಅಪ್ಪಂದಿರಿಗೆ ದಾರಿಬಿಟ್ಟರಲ್ಲವೇ ನಿನಗೆ ದಾರಿಬಿಡುವುದು? ಸಮರವೆಂದರೆ ಗೊಂಬೆಯಾಟವಲ್ಲ?

ಅಭಿ: ಅಂದು ನನ್ನ ದೊಡ್ಡಪ್ಪ ಭೀಮ ಮಾಡಿದ ಅಪಮಾನವನ್ನು ಇಷ್ಟು ಬೇಗ ಮರೆತೆಯಾ? ಅಂದು ನಿನ್ನ ಪೌರುಷವೆಲ್ಲಿ ಹೋಗಿತ್ತು? ಮಂದಮತಿಯೇ, ನಿನ್ನಂತಹ ಪಾಪಿಗಳ ರುಂಡಗಳ ಚೆಂಡಾಟ ಆಡುವುದೆಂದರೆ ನನಗೆ ಬಹಳ ಪ್ರೀತಿ. ಅದಕ್ಕಾಗಿ ಆಟದ ಬಯಲನ್ನು ಬಿಟ್ಟು ನಿನ್ನನ್ನು ಹುಡುಕಿಕೊಂಡು ಬಂದಿರುವೆನು. ಬಿಡು ದಾರಿ!

ಜಯ: ಬಾಲಕ, ಸುಮ್ಮನೆ ಹೊರಟುಹೋಗು. ಸಾಕು ಹುಚ್ಚಾಟ.

ಅಭಿ: ಸಾಕುಮಾಡು ನಿನ್ನ ಹುಚ್ಚುಚ್ಚಾಟವನ್ನು! ನಿನ್ನನ್ನು ವಧಿಸಿಯೇ ಮುಂದರಿಯುವೆನು. (ಇಬ್ಬರೊಳಗೂ ಕಾದಾಟ ನಡೆಯುವುದು. ಅಭಿಮನ್ಯುವು ಕೋಟೆಯನ್ನು ಹಾರಿ ಒಳನುಗ್ಗುವನು.)

ಜಯ: ಅರರೇ, ಏನು ಕೌತುಕ! ಎಂಥ ಚಾತುರ್ಯ! ವೀರನೆಂದರೆ ಈತನೇ ಸರಿ. ಅಬ್ಬಾ, ಈತನ ಬಾಣದ ಪೆಟ್ಟೇ! ಸ್ವಲ್ಪ ಆಯಾಸ ಪರಿಹಾರಮಾಡಿಕೊಳ್ಳುತ್ತಿರುವಾಗ ಫಕ್ಕನೆ ಒಳಗೆ ಹಾರಿಬಿಟ್ಟನು. ಹುಂ! ಈತನ ಅವಸ್ಥೆ ಮುಗಿದಂತೆಯೇ ಸರಿ. ಇನ್ನಾರಾದರೂ ಒಳಪ್ರವೇಶ ಮಾಡದಂತೆ ಕವಾಟರಕ್ಷಣೆಮಾಡುತ್ತೇನೆ. (ಪರದೆ)

## ದೃಶ್ಯ ೬

[ಚಕ್ರವ್ಯೂಹದ ಮಧ್ಯಭಾಗ—ಅಭಿಮನ್ಯುವು ವೀರತ್ವದಿಂದ ಕಾದಾಡುತ್ತಿರುವನು. ಸೈನಿಕರು "ಅಯ್ಯೋ! ಬಂದೇಬಿಟ್ಟ ಯಮಕಿಂಕರ!" "ಸತ್ತೆವು ಓಡಿರಿ" ಎಂಬ ಭಯಂಕರ ನಿನಾದದಿಂದ ಓಡುತ್ತಿರುವರು. ಕೌರವನು ಬಂದು ಅಭಿಮನ್ಯುವನ್ನು ಎದುರಿಸುವನು.]

ದುರ್ಯೋಧನ: ಬಾಲಕ, ಅಭಿಮನ್ಯು, ನೀನು ಹಿಂದೆರಳು. ನಿನಗೆ ಯುದ್ಧವು ಹೇಳಿದುದಲ್ಲ. ಹಾಲಹಸುಳೆಯೆಂತು ಬವರವನ್ನೆಸಗುವೆ?

ನಿನ್ನನ್ನು ಕಳುಹಿಸಿದವರಿಗೆ ನಿನ್ನ ಮೇಲೆ ಮಮತೆ ಇಲ್ಲದಿದ್ದರೂ ನನಗೆ ನಿನ್ನ ಮೇಲೆ ಕನಿಕರವುಂಟಾಗುತ್ತಿದೆ.

ಅಭಿಮನ್ಯು: ಸುಯೋಧನಾ, ರಣರಂಗದ ಮಧ್ಯದಲ್ಲಿ ನಿಂತು ತಳ ಮಳಿಸುವುದು ವೀರರ ಲಕ್ಷಣವಲ್ಲ. ನನ್ನನ್ನು ಹಿರಿಯರು ಬುದ್ಧಿಯಿಲ್ಲದೆ ಕಳುಹಿಸಲಿಲ್ಲ. ನಿನ್ನ ತಂದೆಯು ಜನ್ಮತಃ ಕಣ್ಣಿಲ್ಲದವ. ಆತನಿಗೆ ಕೈ ದೀವಿಗೆಯಂತೆ, ಆತನ ಕೈಹಿಡಿದು ಊರುಗೋಲಿನಂತೆ ನಡೆಸುವುದನ್ನು ಬಿಟ್ಟು ಇಲ್ಲಿಗೆ ಬಂದುದು ಅತ್ಯಾಶ್ಚರ್ಯ. ನಿನ್ನ ಹುಟ್ಟಿಗಾಗಿ ನಿನ್ನ ತಾಯಿ ಗಾಂಧಾರಿಯು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಆಕೆಯ ಮನವನ್ನು ನೋಯಿ ಸಿಯೂ ಬಂದಿರುವಿ ನಿನ್ನ ರಾಜ್ಯದಾಹದಿಂದಾಗಿ, ಕುರುಕುಲವೃದ್ಧ ಪಿತಾ ಮಹನನ್ನು ಕೊಲ್ಲುವಂತೆಸಗಿ, ಗಂಗಾಮಾತೆಯು ಅಪ್ಪುತ್ರವತಿಯೆನಿಸು ವಂತೆ ಎಸಗಿದವನು ನೀನು. ಕಂಡ ಕಂಡವರ ಮಕ್ಕಳನ್ನು ಮೃತ್ಯುವಿನ ದವಡೆಗೊಪ್ಪಿಸಿ, ರಣಕ್ಕೆ ಬೆನ್ನು ತಿರುಗಿಸುವ ನೀಚನು ನೀನು. ಇಂದು ನನಗೆ ತತ್ವವನ್ನು ಬೋಧಿಸುತ್ತಿರುವೆ! ಸಾವಿರಾರು ಹೆಮ್ಮಕ್ಕಳ ಕಣ್ಣೀರು ಮಿಶ್ರಿತವಾದ ಶಾಪವು ಇಂದು ಫಲಿಸದೇ ಬಿಟ್ಟೀತೇ?

ಸುಯೋ: ಎಳ್ಳಿನಷ್ಟು ಕಿಚ್ಚಾದರೂ ಮಾತಿನ ಮಲ್ಲ! ಮಹಾ ಭಾಷಣಕಾರ! ಇರಲಿ. ಬುದ್ಧಿಹೀನ ಬಾಲಕ, ಜೀವದಾಸೆಯಿದ್ದರೆ ರಣಕ್ಕೆ ಬೆನ್ನು ತಿರುಗಿಸು!

ಅಭಿ: ಅಭಿಮನ್ಯುವು ಎಂದಾದರೂ ರಣಕ್ಕೆ ಬೆನ್ನು ತಿರುಗಿಸುವನೆ? ಕುರುಪತಿ, ಸಿದ್ಧನಾಗು, ಬಾಣತೊಡು.

ಸುಯೋ: ಏನು? ಬಾಲಕನೆಂದು ಬಗೆದು ನೀತಿವಾಕ್ಯಗಳನ್ನುಸಿರಿದರೆ ಮನ ಬಂದ ಹಾಗೆ ನುಡಿಯುವಿಯಾ? ಸಾಕು ನಿನ್ನ ಹುಡುಗಾಟದ ವೀರತ್ವ!

ಅಭಿ: ಮಾನಗೇಡಿ, ನನಗೆಂದೇ ಮೀಸಲಾಗಿಟ್ಟಿರುವ ಕನ್ಯೆಗೆ— ಅಭಿಲಾಷೆಪಟ್ಟು ಬಂದ ಧೀರನಲ್ಲವೇ? ನನ್ನ ಮಾತೆಯುವರ ವಸ್ತ್ರವನ್ನು ತುಂಬಿದ ಸಭೆಯಲ್ಲಿ ಸೆಳೆಯಿಸಿದಾತನು ನೀನಲ್ಲವೇ? ಚಿತ್ರಸೇನನ ನಾಗಪಾಶ ದಿಂದ ಬಂಧಿತನಾದಾಗ ನಮ್ಮವರು ಬೇಕಾಯಿತಲ್ಲವೇ? ಕಾಶೀರಾಜನಲ್ಲಿ ಹೆಂಡತಿಗಾಗಿ ಸೆರೆಯಲ್ಲಿ ಬಂದಿಯಂತೆ ಬಿದ್ದಿರುವಾಗ ನಮ್ಮವರು ಬೇಕಾಯಿ ತಲ್ಲವೇ? ಸುಡು ನಿನ್ನ ಘನತೆಯನ್ನು! ನ್ಯಾಯವಾಗಿ ಸಲ್ಲತಕ್ಕ ರಾಜ್ಯವನ್ನು ಕೇಳಿದರೆ, ಬವರವನ್ನೇ ಬರಮಾಡಿ, ಭೀಷ್ಮರನ್ನು ಬಲಿಗೊಟ್ಟೆಯಲ್ಲವೇ?

ಅದರ ಫಲವನ್ನು ಈಗ ಎರಡೂ ಕೈಗಳಿಂದ ನೊಗೆ ನೊಗೆದು ಭುಂಜಿಸು (ಬಾಣಪ್ರಯೋಗಿಸುವನು).

ಸುಯೋ: ಎಲ್ಲವನ್ನೂ ಜೂಜಿನಲ್ಲಿ ಸೋತ ನಿನ್ನವರು ಯಾವ ಮುಖದಿಂದ ಪುನರಪಿ ರಾಜ್ಯ ಕೇಳಿದರು? ವಿರಾಟನಗರದಲ್ಲಿ ಗತಿಹೀನರಾಗಿ, ಕ್ಷತ್ರಿಯರಿಗೆ ಸಲ್ಲದ ವೇಷಭೂಷಣಗಳು—ಅಯ್ಯೋ ನಿಮ್ಮವರ ಅವಸ್ಥೆಯೇ! ಬೃಹನ್ನಳೆ, ಜಡೆಹೆಣೆಯುವ ಸೈರಂಧ್ರಿ—ಆ ಮುಖಗಳನ್ನೆಲ್ಲಾ ಎಲ್ಲಿಡಬೇಕು? ಮರುಳೆ! ಹಿಂದಿನ ಮಾತುಗಳನ್ನು ನೆನೆಸಿಕೊಂಡು ಈಗ ಬವರಕ್ಕೆ ಸಿದ್ಧನಾಗಿರುವಿ. (ಬಾಣಪ್ರಯೋಗಿಸುವನು.)

ಅಭಿಮನ್ಯು: ನೀಚ! ಈ ಎಲ್ಲ ಅವಸ್ಥೆಗಳಿಗೆ ಮೂಲಕಾರಣ ನೀನು! ಕೃತಕ ಸಭಾಭವನದಲ್ಲಿ ಮತಿಗೆಟ್ಟ ನೀಚನು ನೀನು. (ಧನುಸ್ಸಿಗೆ ಬಾಣ ಹೂಡಿ) ಇದೋ, ಗುರುಜನರ ನುಡಿಯನ್ನು ಕೇಳದ ತಪ್ಪಿಗೆ!

ಸುಯೋ: ಷಂಡ! ನಿನ್ನ ಹೆಡತಲೆಯ ಹಿಂದೆ ಮೃತ್ಯು ತಾಂಡವ ನೃತ್ಯವನ್ನೆಸಗುವಾಗ ಯಾರೇನು ಮಾಡಬಲ್ಲರು? ವತ್ಸಲೆಯನ್ನು ಅಪಹರಿಸಿದ ತಪ್ಪಿಗೆ—ನಿನ್ನ ಹೃದಯಕ್ಕೆ ಬಾಣ (ಇಬ್ಬರೂ ಬಾಣಬಿಡುವರು. ಕೌರವನ ಕೈ ಹಿಂದಾಗುವುದು. ಅಭಿಮನ್ಯುವು ರಥದಿಂದ ಹಾರಿ ಕೌರವನನ್ನು ಹಿಡಿದು ಮೂದಲಿಸುವನು.)

ಅಭಿಮನ್ಯು: ಗಂಡರಲ್ಲಿ ಗಂಡ! ಕುರುಕುಲೇಶ್ವರ ಸಾರ್ವಭೌಮ! ರತ್ನಖಚಿತ ಕಿರೀಟಧಾರಿ!! ಅಯ್ಯೋ ನಿನ್ನ ಅವಸ್ಥೆಯೇ! ಬಾಲಕನು ನಾನಲ್ಲವೇ? ರಣ ನಿಪುಣನು ನೀನು! ರಣಹೇಡಿಯು ನಾನಲ್ಲವೇ!!! ಅಂದು ನಮ್ಮವರಿಗೆ ವಿಷದ ಲಡ್ಡುಗಳನ್ನು ತಿನ್ನಿಸಿದವ! ಮಾತೆಯಾ ಸಾಲೆಯನ್ನೆಳೆದಾತ! ದ್ವೈತವನದಲ್ಲಿ ಕೈಸೆರೆ ಸಿಕ್ಕಿದಾತ! ವಿರಾಟನಗರಗಲ್ಲಿ ರಜಕಣವನ್ನು ತಿಂದಾತ! ಕೃತಕಸರೋವರದಲ್ಲಿ ವಸ್ತ್ರವನ್ನು ಮೇಲೆತ್ತಿದಾತ! ನಿಜಸರೋವರದಲ್ಲಿ ಮುಳುಗಿದಾತ! ಅರಗಿನಾಲಯದಲ್ಲಿ ಸುಡಲೆತ್ನಿಸಿದಾತ! ಕೃತ್ರಿಮ ಜೂಜಿನಲ್ಲಿ ಸಕಲ ಐಶ್ವರ್ಯ ಅಪಹಾರಕ! ಕರೆ, ಮಾವ ಶಕುನಿಯನ್ನು! "ಮಿತ್ರ ಕರ್ಣ" ಎಂದು ಕರೆ! ಮಾನಗೇಡಿ! ಮಾತನಾಡು! ಕೌರವಾ, ಮುಖವೆತ್ತಿ ಇತ್ತ ನೋಡೊಮ್ಮೆ. ಲಜ್ಜಾಸ್ತ್ರೀಯರಂತೆ ಮುಖವನ್ನು ಏಕೆ ಬಗ್ಗಿಸಿರುವೆ? ಏನನ್ನು ಎಸಗುತ್ತಿರುವೆ? ಕುಮತಿಯೇ, ಎಲ್ಲಿರುವರು ನಿನ್ನವರೆಲ್ಲ? ಯಾರ ಬಸಿರಿನೊಳಡಗಿರುವರು?

ಇದೋ, ಹಿಡಿದಿರುವ ಕರವಾಳದಿಂದ ನಿನ್ನನ್ನು ವಧಿಸುತ್ತಿದ್ದೆ. ಆದರೆ ಭೀಮಪ್ಪನವರು ನಿನ್ನ ಊರುಗಳೆರಡನ್ನು ಒಡೆಯುವೆನೆಂದು ಪ್ರತಿಜ್ಞೆ ತೊಟ್ಟಿರುವ ಕಾರಣ ನಿನ್ನನ್ನು ಬಿಟ್ಟಿರುತ್ತೇನೆ. ಬೇಡಿ ತಿಂದು ಬದುಕಿಕೋ? (ತಳ್ಳುವನು. ಕೌರವನು ಹೋಗುವನು. ಕರ್ಣನು ತಡೆಯುವನು.)

ಕರ್ಣ: ಕುವರ, ತಡೆ, ಮುಂದರಿಯದಿರು! ನಿನ್ನನ್ನು ಯಮಾಲಯಕ್ಕೆ ಕಳುಹಲು ಬಂದಿರುವ ಮೃತ್ಯುವೆಂದರಿಯು.

ಅಭಿ: ನಾನೆಲ್ಲಿಯೂ ಓಡಲಾರೆ. ಹೋಗುವುದಿದ್ದರೂ, ನಿನ್ನನ್ನು ಕಾಲನೂರಿಗೆ ಕಳಿಸಿಯೇ ಮುಂದರಿಯುವೆನು.

ಕರ್ಣ: ಶಿಶುಹತ್ಯಾದೋಷಕ್ಕಂಜಿ ಬಿಟ್ಟಿರುವೆನು! ಇಲ್ಲದಿದ್ದರೆ ಯಾವಾಗಲೋ ಪರಲೋಕದ ದಾರಿ ಹಿಡಿಯುತ್ತಿದ್ದೀ!

ಅಭಿ: ಸಣ್ಣವನೆಂದು ತಾತ್ಸಾರಮಾಡದಿರು. ಎತ್ತು ಧನುಸ್ಸನ್ನು!

ಕರ್ಣ: ಸಾಕುಮಾಡು! ಬಾಲಕ ಬಾಲಕ ಎಂದು ತಡೆದುಕೊಂಡರೆ ಮೈಮೇಲೇರುವಿಯಾ? ಸಿದ್ಧನಾಗು ಕದನಕ್ಕೆ.

ಅಭಿ: ಈ ಮಾತು ನಿನ್ನ ಹೃದಯದಿಂದಲೇ ಬರಲಿ ಎಂದು ತಡೆದಿದ್ದೆ. ಹುಂ, ಬಾಣ ಬಿಟ್ಟಿರುವೆನು. (ಕರ್ಣನು ಮೂರ್ಛೆಹೊಂದುವನು.) ಎಲ್ಲರೂ ರಣಹೇಡಿಗಳು! ಇನ್ನೂ ಮುಂದರಿಯುತ್ತೇನೆ. (ಪರದೆ).

## ದೃಶ್ಯ ೭

[ಕುರುಕ್ಷೇತ್ರದಲ್ಲಿ ಚಕ್ರವ್ಯೂಹದ ಒಂದು ಭಾಗ—ಕೌರವ, ಕರ್ಣ, ದ್ರೋಣರು ಮಂತ್ರಾಲೋಚನೆಯಲ್ಲಿ ಮಗ್ನರಾಗಿರುವರು.]

ದ್ರೋಣ: ರಾಜನ್, ಅದೃಷ್ಟಹೀನರಿಗೆ ದೈವಬಲವಿಲ್ಲವೆಂಬುದಕ್ಕೆ ನಾವೇ ನಿದರ್ಶನ. ಅತಿರಥ ಮಹಾರಥರೆನಿಸಿದ ನಾವುಗಳು ಓರ್ವ ಬಾಲಕನಿಗೆ ಸೋತುದೆಂದರೆ ಇದಕ್ಕಿಂತಲೂ ನಾಚಿಕೆಯೇನಿದೆ?

ಸುಯೋ: ಶೌರ್ಯವೆಂದರೆ ಅಭಿಮನ್ಯುವಿನದು! ಏನೊಂದು ವೀರತ್ವ! ಅರ್ಜುನಾ, ಇಂತಹ ಸುಪುತ್ರನನ್ನು ಪಡೆದ ನೀನೇ ಧನ್ಯ! ಕರ್ಣಾ, ನೀನಿದ್ದೂ ನನ್ನ ಕುಮಾರನನ್ನು ಆಹುತಿಕೊಟ್ಟೆಯಲ್ಲವೇ? (ದುಃಖದಿಂದ) ಹಾ! ಕುಮಾರ ಲಕ್ಷ್ಮಣಾ! ತಂದೆಗೆ ಮಕ್ಕಳು ತರ್ಪಣಕೊಡುವುದು ಲೋಕ ಪದ್ಧತಿ. ಅದನ್ನು ಹಿಂದಿಕ್ಕಿ ನಾನೇ ನಿನಗೆ ತಿಲಾಂಜಲಿಯನ್ನು ನೀಡಬೇ

ಕಾಯಿತಲ್ಲವೇ? ನನ್ನ ಉತ್ತರಾಧಿಕಾರಿ! ನಿನ್ನ ಪಟ್ಟಾಭಿಷೇಕದ ಸಮಯಕ್ಕೆ ಪುಷ್ಪವೃಷ್ಟಿಯು ನಿನ್ನ ಶಿರಕ್ಕೆ ಬೀಳಬೇಕಾಗಿರುವಾಗ, ಇಂದು ನನ್ನಿಂದಾಗಿ ನಿನಗೆ ಅಭಿಮನ್ಯುವಿನ ಬಾಣವರ್ಷವು ಬಿದ್ದು ಮೃತಪಟ್ಟೆಯಲ್ಲವೇ? ಕುಮಾರ ಅಭಿಮನ್ಯು, ನಿನ್ನ ಆತ್ಮತೇಜಸ್ಸಿಗೆ ನಮಸ್ಕಾರ. ನೀನೇ ಧನ್ಯ!!

ದ್ರೋಣ ಕೌರವಾ, ಆಹುದಾಗಿಹೋಯಿತು. ದುಃಖವನ್ನು ಬದಿಗೊತ್ತಿ, ಎದ್ದೇಳು. ಬಾಲಕನೆಂದು, ಶಿಶುಹತ್ಯಾದೋಷಕ್ಕಂಜಿ, ಅಭಿಮನ್ಯುವನ್ನು ಉಳಿಸಿದೆ. ಇನ್ನು ಅತನನ್ನು ಜೀವದೊಂದಿಗೆ ಬಿಡಲಾರೆ. ಸಾರ್ವಭೌಮಾ, ಎಂದಿನವರೆಗೆ ಆತನ ಹಸ್ತದಲ್ಲಿ ಚಾಪವು ರಾರಾಜಿಸುತ್ತಿರುವುದೊ ಅಲ್ಲಿಯು ಪರಿಯಂತರ ಆತನ ವಧೆಯು ಅಶಕ್ಯ ಅದು ಕಾರಣ, ಇನ್ನು ವಾಮಮಾರ್ಗವನ್ನು ಅನುಸರಿಸತಕ್ಕುದು. ಕರ್ಣಾ, ನಾವುಗಳು ಆತನ ಮುಂದೆ ಯುದ್ಧವನ್ನೆಸಗುತ್ತಿರುವಾಗ ನೀನು ಆತನ ಹಿಂಗಡೆಯಲ್ಲಿ ನಿಂತು ಆತನ ಹಸ್ತದ್ವಯಗಳನ್ನು ತುಂಡರಿಸು. ಇತರರು ಆತನ ಒಂದೊಂದು ಅಂಗಗಳನ್ನು ಕಡಿಯಲಿ. ಇದೇ ಆತನ ಅಳಿವಿಗೆ ಉಳಿದಿರುವ ಮಾರ್ಗ.

ಕರ್ಣ: (ಉದ್ವಿಗ್ನನಾಗಿ) ಆಚಾರ್ಯರೆ, ಇದೇನನ್ನು ನುಡಿಯುವಿರಿ? ವೀರಾಧಿವೀರರೆಂಬ ಅಂಕಿತವುಳ್ಳ ನಾವುಗಳು ಓರ್ವ ಬಾಲಕನನ್ನು ಮರೆಮೋಸದಿಂದ ಕೊಲ್ಲುವುದೇ? ಇದೊಂದು ಪೌರುಷವೇ? ತಂತ್ರಯುದ್ಧದಲ್ಲಿ ನಾನಂತೂ ಭಾಗವಹಿಸಲಾರೆ. ರಾಜ್ಯದಾಸೆಯಿಂದಾಗಿ ಪಾಪವನ್ನು ಧರಿಸಲಾರೆ! ನ್ಯಾಯದಿಂದ ಕೊಲ್ಲೋಣ; ಸತ್ತರೆ ವೀರಸ್ವರ್ಗ.

ದ್ರೋಣ: ಕರ್ಣಾ, ಆತನು ಉಳಿದರೆ, ನಾವುಗಳು ಯಮಸದನಕ್ಕೆ ತೆರಳುವುದಂತೂ ಖಂಡಿತ. ನಾವು ಈ ಕೆಲಸವನ್ನು ಸ್ವಾಮಿಗಾಗಿ ಎಸಗುವೆವು. ಪಾಪವು ತಟ್ಟಿದರೂ ಆತನಿಗೆ! ಹುಂ, ಧರಿಸು ಶಸ್ತ್ರಾಸ್ತ್ರಗಳನ್ನು.

ಕರ್ಣ: ಗುರುಗಳೇ! ಆಗಲಿ. ನಿಮ್ಮ ಮಾತಿಗೆ ಪ್ರತಿನುಡಿಯುವುದಿಲ್ಲ. ಆದರೆ, ಇದರಿಂದ ನಮಗೊಂದು ಅಳಿಸಲಾರದ ಕಳಂಕ. ಇರಲಿ. ನನ್ನ ಪಾಲಿನ ಹೊರೆಯನ್ನು ನೆರವೇರಿಸುವೆನು.

ಕೌರವ: ಕರ್ಣ–ದ್ರೋಣರೇ, ಕೃಪ, ಅಶ್ವತ್ಥಾಮ, ಶಲ್ಯರೊಡನೆ ಅಭಿಮನ್ಯುವಿದ್ದಲ್ಲಿಗೆ ತೆರಳೋಣ. (ಮೂವರೂ ಪ್ರಸ್ಥಾನ.)

( ತೆರೆ. )

## ದೃಶ್ಯ ೮

[ಚಕ್ರವ್ಯೂಹದ ಮಧ್ಯಭಾಗ— ಅಭಿಮನ್ಯುವನ್ನು ದ್ರೋಣನು ಎದುರಿಸಿ ನಿಂತು ಕಾದಾಡುವನು. ಉಳಿದವರು ಮರೆಯಲ್ಲಿ ನಿಂತಿರುವರು]

ದ್ರೋಣ: ಎಲಾ ಅಭಿಮನ್ಯು, ನನಗೆ ಕೈಮುಗಿದು "ದಾಸೋಽಹಂ" ಎಂದು ಮೂರು ಬಾರಿ ಹೇಳು, ನಿನ್ನನ್ನು ಬಿಟ್ಟುಬಿಡುವೆನು.

ಅಭಿಮನ್ಯು: ಆಚಾರ್ಯವರ್ಯ, ಈ ಮಾತನ್ನು ಹೇಳಿ ನಾನು ಪ್ರಾಣದಾನ ಬೇಡುವೆನೆಂದು ಕನಸ್ಸುಮನಸ್ಸುಗಳಲ್ಲಿಯೂ ಗ್ರಹಿಸದಿರಿ. ಸುಕ್ಕುಗಟ್ಟಿದ ಮುಖ, ಕಂದಿದ ಶರೀರ, ನಡುಗುತ್ತಿರುವ ಕೈಕಾಲುಗಳು, ನರೆತ ಕೂದಲು, ಹಣ್ಣಾದ ಗಡ್ಡಮೀಸೆಗಳು—ಇವುಗಳಿಂದ ಪರಿವೇಷ್ಟಿತರಾದ ನಿಮಗೂ ಯುದ್ಧದಾತುರವೇ?

ದ್ರೋಣ: ಮಗೂ, "ಮರವು ಮುದಿಯಾದರೂ, ಅದರ ಹಣ್ಣು ಮುದಿಯುವುದೇ?" ಅಂತೆಯೇ ಶರೀರ ಮುಪ್ಪು ಆದರೂ, ಶಕ್ತಿಗೆ ಜರೆಯು ಬಂದುದಿಲ್ಲ. ನಿನಗೆ ಎಳೆರಕ್ತದ ಉತ್ಸಾಹ!

ಅಭಿ: ಗುರುವರ್ಯರೇ, ಆ ಅಧಟ ಕೌರವನು ಅಧರ್ಮದಿಂದ ರಾಜ್ಯವನ್ನು ಸೆಳೆದಿರುವಾಗ, ನೀವೂ ಆತನಿಗೆ ಸಹಾಯವನ್ನೆಸಗುವುದೇ? ಕೌರವ ಪಾಂಡವರಿಗೆ ವಿದ್ಯಾಗುರುವಲ್ಲವೇ?

ದ್ರೋಣ: ಬಾಲಕಾ, ಬಹು ದೊಡ್ಡ ಶಾಸ್ತ್ರವಾದಿಯಾದಿಯಾ? ಕೇಳು, ಯಾವಾಗ ಕೌರವನ ಋಣದಲ್ಲಿ ಬಿದ್ದಿರುವೆವೋ ಆತನಿಗೆ ಸರ್ವಸಹಾಯವನ್ನು ಕೊಡುವುದು ಕರ್ತವ್ಯ. ಉಂಡ ಮನೆಗೆರಡನ್ನು ಬಗೆದು ಕೃತಜ್ಞನಾಗಲೇ? ಹೋಗು ಮಗೂ, ನಿನಗೆ ಯುದ್ಧಬೇಡ.

ಅಭಿ: ಅಸ್ತ್ರನಿಪುಣರೇ, ಬಾಲಕನೆಂದು ನನ್ನನ್ನು ಹೀನಯಿಸಬೇಡಿರಿ. ಮಾವ ಕೃಷ್ಣನವರು ಬಾಲಕರಾಗಿ ಎಂತೆಂಥಹವರ ನಾಶಕ್ಕೆ ಕಾರಣನಾಗಿರುವರು? ಮನ್ಮಥನು ಶಂಭರಾಸುರನನ್ನು ವಧಿಸಿಲ್ಲವೆ? ಕುಶ-ಲವರು ಶ್ರೀರಾಮನನ್ನು ಸೋಲಿಸಲಿಲ್ಲವೆ? ಸಾಕುಮಾಡಿ ಮಾತನ್ನು. ಕೊಡಿ ಬವರವನ್ನು.

ದ್ರೋಣ: ಅಭಿಮನ್ಯು! ಇದು ಕೊನೆಯ ಯುದ್ಧ! ಜಯಾಪಜಯಗಳ ನಿರ್ಣಯಕ ಯುದ್ಧ! ಹುಂ, ಸಿದ್ಧನಾಗು.

ಅಭಿ: ಆಗಲೇ ಬಾಣವರ್ಷವನ್ನು ನಿಮ್ಮ ಮೇಲೆ ಕರೆದಿರುವೆನು. (ಯುದ್ಧವು ಭಯಂಕರವಾಗಿ ನಡೆಯುವುದು. ಒಂದು ಬಾಣವು ಹಿಂದಿನಿಂದ ಬಂದು ಅಭಿಮನ್ಯುವಿನ ಹಸ್ತವನ್ನು ತುಂಡರಿಸುವುದು]

ಅಭಿ: (ಹಿಂದೆ ತಿರುಗಿ) ಓಹೋ ಕರ್ಣ! ಭಲೇ! ಬೆಸ್ತಕುವರನ ವಿದ್ಯೆಯನ್ನೇ ಎಸಗಿದೆ! ಪ್ರಿಯ ಭಾರ್ಗವನ ಪಟ್ಟ ಶಿಷ್ಯ! ಇಪ್ಪತ್ತೊಂದು ಬಾರಿ ಕ್ಷತ್ರಿಯರ ನಿರ್ನಾಮವನ್ನೆಸಗಿದ ವೀರಾಗ್ರೇಸರ ಪರಶುಧರನು ಈ ವಿದ್ಯೆಯನ್ನು ಕಲಿಸಿದನೇ? ಅಥವಾ ನೀನೇ ಕಲಿತ ವಿದ್ಯೆಯೇ? ಅರಿಕರಿನಿಕರ ಕೇಸರಿ—ದಾನಶೂರ ಕರ್ಣ—ಮೆಚ್ಚಿದೆ! ಭಲೆ!! ಭಲೆ!! ಇಲ್ಲಿಗೆ ನನ್ನ ಕತೆ ಮುಗಿಯಿತೆಂದು ತಿಳಿದೆಯಾ? ಖಡ್ಗವಿದ್ಯೆಯನ್ನು ಪ್ರದರ್ಶಿಸುವೆನು— (ಕರ್ಣನು ಇನ್ನೊಂದು ಹಸ್ತವನ್ನೂ ತುಂಡರಿಸುವನು. ಅಭಿಮನ್ಯುವು ರಥಚಕ್ರವನ್ನು ಹೆಗಲಿನಮೇಲಿಟ್ಟು ವೈರಿಗಳ ಮೇಲೆ ಪ್ರಯೋಗಿಸುವನು. ಶಲ್ಯನು ಆತನ ಭುಜಗಳನ್ನು ತುಂಡರಿಸುವನು. ದುಶ್ಶಾಸನನ ಮಗನು ಬಂದು ಅಭಿಮನ್ಯುವನ್ನು ಎದುರಿಸುವನು.]

ದುಶ್ಶಾಸನನಸುತ: ಎಲಾ ಅಭಿಮನ್ಯು, ಇನ್ನೂ ಜೀವಿಸಿರುವೆಯಾ? ಹೋರಾಡು! ಎಷ್ಟು ಹೋರಾಡುವಿಯೋ ನೋಡಿಯೇ ಬಿಡುವೆನು. (ಖಡ್ಗವನ್ನು ಮೇಲೆತ್ತುವನು.]

ಅಭಿಮನ್ಯು: ನಿನ್ನನ್ನು ನಾಶಪಡಿಸಲು ಮಾತ್ರ ಜೀವದಿಂದ ಇರುವೆನು. ಆದರೆ, ನಿರಾಯುಧನಾದ, ಕೈಕಾಲುಗಳು ಇಲ್ಲದ ನನ್ನ ಮೇಲೆ ಖಡ್ಗವನ್ನು ಹಿರಿಯದಿರು! ಇದು ನ್ಯಾಯವಂತೂ ಅಲ್ಲ. ಖಡ್ಗವನು ದೂರ ಬಿಸಾಡಿ ಬಾ. ನಾವಿಬ್ಬರೂ ಮಲ್ಲಯುದ್ಧವನ್ನೆಸಗೋಣ. (ಖಡ್ಗವನ್ನು ಬಿಸಾಡಿ, ಅಭಿಮನ್ಯುವನ್ನು ಹಿಡಿದುಕೊಳ್ಳುವನು. ಇಬ್ಬರೂ ತುಂಬಾ ಹೊತ್ತು ಕಾದಾಡುವರು. ಏಳುವರು; ಅಭಿಮನ್ಯುವು ದುಶ್ಶಾಸನನ ಮಗನನ್ನು ಬಿಗಿಯಾಗಿ ಕಾಲುಗಳಿಂದ ಸುತ್ತಿ ಕೆಳಗೆ ಬೀಳುವನು. ಬಿದ್ದ ರಭಸಕ್ಕೆ ಒಬ್ಬರ ಮೇಲೊಬ್ಬರು ಬಿದ್ದು, ಅಭಿಮನ್ಯುವು ಮೇಲೆ—ಇಬ್ಬರೂ ಅಸುವನ್ನು ನೀಗುವರು.] ಪರದೆ.



Edited, Printed & Published by K. V. Shenoy
at The Prabhat Printers, Ltd., Mangalore.